ಗೀ ಗೀ ಪದಗಳೆಂದರೆ,

# ನಾಡನುಡಿಯ ನಾಟ್ಯ ಲೀಲೆ

—ಬಾಬೂ ಕಾಮತ

ರಾಜನೀತಿಯು ದರಬಾರಿನಲ್ಲಿ ಅಲ್ಲಾಡುತ್ತಿದ್ದಾಗ ಲೋಕೋಕ್ತಿಯು ಹಳ್ಳಿಕೊಳ್ಳಗಳೊಳಗಿಂದ ತಲೆಯೆತ್ತಿ ಸಪ್ತಾಹ ಸಮಾರಂಭದಲ್ಲಿ ಜನಮನ್ನಣೆ ಹೊಂದುತ್ತಿತ್ತು. ಹಳ್ಳಿಗರ ಬಾಳಿನಲ್ಲಿ ಕಲ್ಲಾಗಿದ್ದವರ ಕಥೆಗಳನ್ನು, ಹುಲ್ಲಾಗಿರುವವರ, ಹೂವಾಗಿರುವವರ ಪ್ರೀತಿಯನ್ನು ಬಣ್ಣಿಸಲು ರಸಿಕ ಕಣ್ಣಿನವರು ಮುಂದೆ ಬಂದು ಮಣ್ಣು, ಹೆಣ್ಣಿನ ಕಥೆಹೇಳಿ ಜನರ ಮನಸ್ಸು ತಣಿಸುತ್ತಿದ್ದರು. ಇವೇ ಜಾನಪದ ಗೀತೆಗಳು. ಬಸವೇಶ್ವರ, ಚನ್ನಮಲ್ಲಿಕಾರ್ಜುನ, ಅಕ್ಕಮಹಾದೇವಿ ಯಂಥ ಸಿದ್ಧಪುರುಷರ, ಸಂಗೊಳ್ಳಿ ರಾಯಣ್ಣ, ಶಿಂದೂರ ಲಕ್ಷ್ಮಣ ಕಿತ್ತೂರ ಚನ್ನಮ್ಮನಂಥ ಯೋದ್ಧರ ವೀರ ಗಾಥೆಯನ್ನು ಹಾಡಲು ನಾಡಿನ ಶಬ್ದನಾದವನ್ನು ಕಂಗೊಳಿಸುವ ರಸಿಕ ಕಾವ್ಯವೇ ಗೀ ಗೀ ಪದದರೂಪ ತಾಳಿತು.

ಹಿಂದುಸ್ತಾನದಲ್ಲಿ ಗಾಂಧಿಜಿಯವರು ಕಾಲಿಟ್ಟಂದಿನಿಂದ ಜನಮಾನಸಕ್ಕೆ ಒಂದು ಹೊಸ ದಾರಿಯೇ ದೊರೆಯಿತು. ರಾಜಕಾರಣವು ಕೆಲ ಬಿಳಿ ಛಾಯಿ ಜನರ ಸೊತ್ತಾಗದೇ ಸೇವಾ ಭಾವನೆಯಿಂದ ಮುಂಬರಲಿಚ್ಛಿಸುವ ಪ್ರತಿಯೊಬ್ಬ ತ್ಯಾಗಿಯ ಕಾರ್ಯಕ್ಷೇತ್ರ ವಾಯಿತು. ೧೯೩೦ ರಲ್ಲಿ, ೪೦ ರಲ್ಲಿ ಹಾಗೂ ೧೯೪೨ ರಲ್ಲಿ ದೇಶದಾದ್ಯಂತ ನಡೆದ ಚಳವಳಿ ಕನ್ನಡನಾಡಿನಲ್ಲಿಯೂ ಜೋರಿನಿಂದ ಒಡಮೂಡಿತ್ತು. ಪರಕೀಯರ ವಿರುದ್ಧ ಹೂಡಿದ ನಾಡಿನ ಈ ಹೋರಾಟವು ಕವಿಹೃದಯವನ್ನು ಸೋಂಕದೆ ಹೇಗೆ ಉಳಿದೀತು ? ರಾಜಕೀಯ ಆಂದೋಲನದ ಎಷ್ಟೋ ಸಂಗತಿಗಳು ಗೀ ಗೀ ಪದಗಳಲ್ಲಿ ಪರಿಣತವಾದವು. ಇಷ್ಟೇ ಅಲ್ಲ ಸೋಬಾನ ಪದಗಳಲ್ಲಿ, ಬೀಸುವ ಹಾಡುಗಳಲ್ಲಿ ಚಳವಳಿಯ ಪ್ರತಿಧ್ವನಿ ಕೇಳಿಸ ಹತ್ತಿತು.

ರಾಜಕೀಯ ಸ್ವಾತಂತ್ರ್ಯ ದೊರಕಿತು. ಗತ ಪರಾಕ್ರಮದ ಹಕೀಗತ್ತು ಕೇಳುವದು ಸೊಬಗದ ಕೆಲಸ .ವಾದರೂ ಹೊಸ ಹೋರಾಟದ ಸುಳಿವು ಅದರಲ್ಲಿ ಇರಲಿಲ್ಲ. ಕಾಂಗ್ರೆಸ್ಸಿಗರೇ ರಾಜ್ಯದಾಡಳಿತ ಸಾಗಿಸುತ್ತಿದ್ದ- ದರಿಂದ, ಮತ್ತು ಅವರೇ ಹಲವಾರು ಸುಧಾರಣೆ ಮಾಡುತ್ತಿರುವರಿಂದ ಆ ಸುಧಾರಣೆಗಳನ್ನು ಬಣ್ಣಿಸುವದೇ ಒಂದು ಭಾಟರ ಕಾರ್ಯವಾಯಿತು. ದೇಶ ದಲ್ಲಿ ನಡೆದಂಥ ಚಟವಟಿಕೆಗಳನ್ನು ದೇಶವಾಸಿಗಳಿಗೆ ತಿಳಿಸಿ ಹೇಳಿಲು ಸರಕಾರಿ ಪ್ರಚಾರವು ಬೇಕಾಗಿತ್ತು. ಹಳ್ಳಿಗರ ಮಾತಿನಲ್ಲಿ ಇಂಥ ಸುದ್ದಿ ಕೊಡಲು ಗೀ ಗೀ ಪದದವರ ನೆರವು ಸರಕಾರಕ್ಕೆ ಸಾಕಷ್ಟಾಗಿದೆ. ಈಗಾದರೂ ಇಂಥ ಪ್ರಚಾರಕಾರ್ಯವು ಸಾಗುತ್ತಲಿದೆ.

ಇದೇ ಕಾಲಕ್ಕೆ ವಿನೋಬಾಜಿಯವರ ಭೂದಾನ ಆಂದೋಲನವು ಪ್ರಾರಂಭವಾಯಿತು. ಒಂದು ಹೊಸ ಚೇತನೆ ನಾಡಿನಲ್ಲಿ ಹಬ್ಬಿತು. ಇದು ಸುಧಾರಣೆಯಲ್ಲ. ಆಮೂಲಾಗ್ರ ಕ್ರಾಂತಿ ವಿಚಾರ. ಗಾಂಧಿಜಿಯವರ ದಾರಿಗುಂಟ ಇಟ್ಟಂಥ ಮುಂದಡಿ ಉಳ್ಳವರಿಗೆ ಸಂತೈಸುವ, ಶ್ರೀಮಂತರನ್ನು ಹೊಗಳುವ ಅಥವಾ ತೆಗಳುವ ಚಳವಳಿ ಅಲ್ಲ ಇದು. ಒಡೆತನವನ್ನೇ ವಿಸರ್ಜಿಸಿ ಗ್ರಾಮವೇ ಒಂದು ಮನೆತನವೆಂದು ಭಾವಿಸುವ ಗ್ರಾಮರಾಜ್ಯದ ಕನಸು ನನಸಾಗಿ ಮಾಡುವ ಪ್ರತ್ಯಕ್ಷ ಪ್ರಯೋಗವಿದು. ಕನ್ನಡ ನಾಡಿನಲ್ಲಿ ಇನ್ನೂ ಇದರ ಗಾಳಿ ಅಷ್ಟು ಜೋರಿನಿಂದ ಬೀಸಿಲ್ಲ. ಅದರ ಪ್ರತ್ಯಕ್ಷ ಪ್ರಯೋಗವು ಬಿಹಾರ ಒರಿಸಾದಲ್ಲಿ ನಡೆದ ಕಾರಣ ಇನ್ನೂ ಇಲ್ಲಿಯ ರಸಿಕವೃಂದರಿಗೆ, ಜನ ಸಾಮಾನ್ಯರಿಗೆ ಅದರ ಅರಿವು ಆಗಿಲ್ಲ. ಹುಲಕುಂದ ಭೀಮಕವಿ, ಹಾಗೂ ಹೊಸೂರಿನ ಮೇಳದವರು ಮುಂಜಾಗ್ರತೆಯಿಂದ ಕೆಲ ಕವನಗಳನ್ನು ಮಾಡಿದ್ದಾರೆ. ತಮ್ಮ ಯಾತ್ರಾ ಪಥದಲ್ಲಿ ಅವುಗಳನ್ನು ಹಾಡಿದ್ದಾರೆ. ನಾನು ಬಿನ್ನೈಸಿದ್ದಕ್ಕೆ ಅವುಗಳನ್ನು ಬರಕೊಟ್ಟಿದ್ದಾರೆ. ಅವುಗಳನ್ನು ಮುದ್ರಿಸಿದ್ದೇನೆ. ಮತ್ತೂ ಯಾರಾದರೂ ಇಂಥ ಕವನ ಮಾಡಿದ್ದರೆ ಕಳಿಸಬೇಕು ಇದೇ ವಿನಂತಿ.

ಗಾಂಧಿ ಜಯಂತಿ,
೨-೧೦-೧೯೫೫.

ಭೂದಾನ ಸಮಿತಿ,
೧೭೧೯, ಕೇಳಕರಬಾಗ, ಬೆಳಗಾಂವಿ.

# ಸರ್ವಧರ್ಮ ಸ್ಮರಣ

ಓಂ ತತ್ಸತ್ ಶ್ರೀ ನಾರಾಯಣ ನೀ ಪುರುಷೋತ್ತಮ ಗುರು ನೀ ।
ಸಿದ್ಧ ಬುದ್ಧ ನೀ, ಸ್ಕಂದವಿನಾಯಕ ಸವಿತಾ ಪಾವಕ ನೀ ॥೧॥
ಬಹ್ಮಮಜ್ದ ನೀ ಯಹ್ವಶಕ್ತಿ ನೀ ಈಶುಪಿತಾ ಪ್ರಭು ನೀ ।
ರುದ್ರವಿಷ್ಣು ನೀ, ರಾಮಕೃಷ್ಣ ನೀ ರಹೀಮ ತಾವೋ ನೀ ॥೨॥
ವಾಸುದೇವ ಗೋವಿಶ್ವರೂಪ ನೀ, ಚಿದಾನಂದ ಹರಿ ನೀ ।
ಅದ್ವಿತೀಯ ನೀ, ಅಕಾಲ ನಿರ್ಭಯ ಆತ್ಮಲಿಂಗ ಶಿವ ನೀ ॥೩॥

# ಏಕಾದಶ ವ್ರತ.

ಅಹಿಂಸೆ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ ।
ಶರೀರಶ್ರಮಅಸ್ವಾದ ಸರ್ವತ್ರಭಯವರ್ಜನ ॥೧॥
ಸರ್ವಧರ್ಮಸಮಾನತ್ವ ಸ್ವದೇಶೀ ಸ್ಪರ್ಶಭಾವನೆ ।
ಹನ್ನೊಂದೀ ವ್ರತ ಕೈಕೊಳ್ಳಿ ನಮ್ರ ನಿಶ್ಚಯ ಭಾವದಿ ॥೨॥

# ಭೂದಾನ ತತ್ವಜ್ಞ-ವಿನೋಬಾ

ಭೂದಾನ ತತ್ವದ ಶೋಧನ ಮಾಡಿದವರು, ಸಾಧು ವಿನೋಬಾ ಭಾವೆಯವರು । ಖಾದಿ ಶಾಸ್ತ್ರಜ್ಞರು ಪಾದಚಾರಿಗಳಾಗಿ ಹೋದ ಹೋದಲ್ಲಿ ಬೋಧಾ ಹೇಳುವರು ॥ ಅವರ ಶಿಷ್ಯರು ಅನೇಕ ಜನರು ಅಲ್ಲಲ್ಲಿ ಮಾಡುವರು ಪ್ರವಚನಾ । ನಾವು ಮಾತ್ರ ಮೂವರು ಹಾಡವರು ಅದೇ ತತ್ವದ ರಾಷ್ಟ್ರ ಪದಗಳನಾ ॥ ಗ್ರಾಮ ಗ್ರಾಮಗಳಲ್ಲಿ ಪ್ರಾಮಾಣಿಕತನದ ಪ್ರೇಮ ಬೆಳಸುವದು ಭೂದಾನಾ । ಭೂಮಿ ಒಡೆಯರಿಗೆ ಸಾಮಾನ್ಯ ಬಡವರಿಗೆ ರಾಮಬಾಣ ಔಷಧ ಭೂದಾನಾ ॥ ರಕ್ತ ರಹಿತ ಕ್ರಾಂತಿ ಸತ್ಯ ಅಹಿಂಸೆಯ ತತ್ವದ ತಳಹದಿ ಭೂದಾನಾ । ನಿತ್ಯ ಜೀವನದ ಆರ್ಥಿಕ ಅಡಚಣಿ ಪೂರ್ತಿ ಗೊಳಿಸುವದು ಭೂದಾನಾ ॥ ಸ್ವಾರ್ಥ ಸಾಧಕರಿಗೆ ನೀತಿ ಕಲಿಸುವ ಉತ್ತಮ ಪ್ರಯೋಗ ಭೂದಾನಾ । ತುರ್ತ ಭಾರತದ ವಾತಾವರಣಕ್ಕೆ ಸಿಸ್ತಾಗಿ ಸಾಗಲಿ ಭೂದಾನಾ ॥

ಭೂಮಿ ಹೆಚ್ಚಾಗಿ ಒಬ್ಬನಲ್ಲೆ ಪಡಬಿದ್ದಾ । ಜಮೀನಿಲ್ಲದೆ ಒಬ್ಬ ಕೊರಗೂದಾ ॥
ಸಿರಿವಂತರುಂಡ ಪಚನಾಗದಾ । ತರ ತರದ ಔಷಧ ನುಂಗುದಾ ।

ಇದು ಎಲ್ಲಾ ಹೋಗಿ ಸರ್ವೋದಯವಾಗಲೆಂದು ಸದಾ ಕಷ್ಟಪಟ್ಟ ದ ಡಿಯುವರು । ಖಾದಿಧಾರಿಗಳು ಪಾದಚಾರಿಗಳಾಗಿ ಹೋದ ಹೋದಲ್ಲಿ ಬೋಧಾ ಹೇಳುವರು ॥೧॥ ಪರಿಸ್ಥಿತಿ ಬಂದಂತೆ ಅರಿತು ನಡಕೊಳ್ಳುವದು ದರವಬ್ಬ ಮನುಷ್ಯನ ಜಾಣತನ । ಸರಿಯು ಇದ್ದಾಗ ನ್ಯಾಯರೆತು ಕೊಡ್ತದೆ ಕರೆದು ಕೊಡಬೇಕ ಇದ್ದಷ್ಟದಾನಾ ॥ ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ ಸ್ಪಷ್ಟ ಹೇಳ್ಯಾರ ಶರಣರು ವಚನಾ । ಕಷ್ಟ ಜೀವಿಗಳ ಹೊಟ್ಟಿಗೆ ಕೊಟ್ಟರ ಹಾಡಿ ಹರಸುರ ನಿಮ್ಮನ್ನಾ ॥ ಇದ್ದವರು ಸ್ವಲ್ಪ ಜನ ಇಲ್ಲದವರು ಹೆಚ್ಚಾಗಿ ಗುದ್ಯಾಟ ನಡಿಯುವವು ಪುನಃ ಪುನಃ । ಸದ್ಯದ ಅಂದೋಲನ ಸಾದ್ಯಂತ ತಿಳಕೊಂಡು ಮೊದಲಿಗೆ ಕಲಿಬೇಕ ಶಾಣೇತನಾ ॥ ಬಡವರು ಮಾತ್ರ ಬಡದಾಡುವದಲ್ಲ ದೃಢವಾಗಿ ಹಿಡಿಬೇಕ ಸಮಾಧಾನಾ । ಮೃಢನು ಈ ಪ್ರಶ್ನೆ ಬಿಡಿಸಲಿಕ್ಕೆ ಈಗ ನಡಕಟ್ಟೆ ನಡಿಶ್ಯಾನ ಆಲೋಚನಾ ॥

ದುರ್ಗುಣಾ ದೂರ ಮಾಡಬೇಕ । ಸದ್ಗುಣ ಸರಳ ಜೀವನಕ ॥
ಅಪರಿಗ್ರಹ ಸುಖ ಆತ್ಮಕ । ಉಪಕಾರವೆ ಕೀರ್ತಿಗೆ ಬೆಳಕ ॥

ಉದಾರತನವು ಉದಯವಾಗಲೆಂದು ಹುಲಕುಂದ ಭೀಮಕವಿ ತಿಳಿಸ ದರು । ಭೂದಾನ ತತ್ವದ ಶೋಧನೆ ಮಾಡಿದವರು ಸಾಧು ವಿನೋಬಾ ಭಾವೆಯವರು ॥

# ಭೂಮಿ ಹಂಚುವಿಕೆ ನೋಡು

ಸರ್ವೋದಯ ನೋಡಿದ್ಯಾ । ಸಮ್ಮೇಲನನೋಡಿದ್ಯಾ । ಕ್ರಾಂತಿಕಾರಿಯಾದ ॥
ಬಡವಶ್ರೀಮಂತರ ನಡುವಿನ ಅಂತರ ಹೊಡೆದೋಡಿಸುವ ಮಂತರ ನೋಡ ।
ಪೊಡವಿಯೊಳಗ ಘಡಾಮುಡಿ ನಡಿಸಿದ ಪುಢಾರಿ ವಿನೋಬಾಜಿ ನುಡಿಯನು ನೋಡ॥೧॥
ಬಡತನ ಎಂಬುದು ಬಿಡಿಸುರ ನೋಡ । ದುಡಿಮೆಗೆಮಹತ್ವಕೊಡವುರ ನೋಡ ।
ನುಡಿದಂತೆ ತಾವು ನಡಿಯುರನೋಡ । ಅಡಿಗಡಿಗೆ ಅನುಭವಪಡೆಯುರ ನೋಡ ॥೨॥
ಕಾಂಚನಮುಕ್ತಿ ಶಾಂತಿ ಸೇನೆ ಸುತ್ರಾಂಜಲಿ ಭಂಗಿಕೆಲಸ ಅಂತಶುದ್ಧಿಯುನೋಡ ।
ಪಂಚವಿಧದ ಕಾರ್ಯಕ್ರಮದಿನಿರಂತರ ಸಂಚಾರಮಾಡುವ ಸಮೂಹ ನೋಡ ॥೩॥

ಹೃದಯಪರಿವರ್ತನ ರಾಜ್ಯಪರಿವರ್ತನ ಕುಟುಂಬ ಪರಿವರ್ತನ ಕಾರ್ಯವು ನೋಡ ।
ಅಧ್ಯಾತ್ಮದಿಂದಶುದ್ಧಾತ್ಮಮಾಡುವ ಬುದ್ಧಿಮತಿಕೆಯ ಸಮಾಜ ನೋಡ ॥೪॥
ಭೂದಾನಮೂಲಕ ಗ್ರಾಮೋದ್ಯೋಗಪ್ರಧಾನ ಅಹಿಂಸಾತ್ಮಕ ಕ್ರಾಂತಿಯು ನೋಡ ।
ಜೀವನದಾನಕೊಟ್ಟ ಪಾವನರಾದರೆಂದು ಸೇವಾಭಾವದ ಸಮಾಜ ನೋಡ ॥೫॥
ರಾಮದುರ್ಗತಾಲೂಕ ಪೈಕಿ ಗ್ರಾಮಸಾಲಾಪೂರ ಭೂಮಿಹಂಚಿಕಿ ಸಮಾರಂಭ ನೋಡ ।
ಸ್ವಾಮಿ ವಿನೋಬಾಜಿ ಜನ್ಮಜಯಂತಿಗೆ ಭೀಮಕವಿ ಹುಲಕುಂದ ಪದಗಳ ನೋಡ ॥೬॥

—( ಬಸಪ್ಪ ಮಾಸ್ತರ ಬೆಟಗೇರಿ, ಹುಲಕುಂದ )

## ಜ್ಞಾನಿಗಳ ವಿಚಾರ

ಕೇಳಿರಿ ಕೇಳಿರಿ ಜ್ಞಾನಿಗಳ ಮಾತಾ ।
ವಿನೋಬಾ ಭಾವೆಯವರ ಮನದ ವೃತ್ತಾಂತಾ ॥

ದೇಶದೊಳು ಅಸಂತೋಷಾ ಬೆಳದತಿ ಮಸ್ತಾ ।
ಅದನ ಹೊಡದೋಡಿಸುವದು ಮೊದಲನೇ ಮಸ್ತಾ ।
ಪಾದಚಾರಿಯಾಗಿ ತಿರಗುರ ಪ್ರಾಂತದಿಂದ ಪ್ರಾಂತ ।
ಭೂದಾನ ಯಜ್ಞದೊಳು ಧುಮುಕ್ಯಾರೀಹೊತ್ತಾ ॥೧॥

ನೀರ ಹವಾ ಸೂರ್ಯನ ಬೆಳಕ ಸರ್ವರ ಸೊತ್ತಾ ।
ಸ್ವಾಮಿ ನಿರ್ಮಾಣ ಮಾಡಿ ಇಟ್ಟಿದ್ದು ಖಚಿತಾ ।
ಭೂಮಿತಾಯಿ ಮಾನವ ಕುಲಕ ಇರುವಳು ಆದರಂತಾ ।
ಪ್ರಮಾಣದಿಂದ ಸರ್ವರ ಹಿತಕ ಕೊಡುವಳು ಸಂಪತ್ತಾ ॥೨॥

ಪ್ರಾಮಾಣಿಕ ಜಮೀನದಾರು ತಿಳಕೊಳ್ರಿ ಬೇತಾ ।
ಕಮ್ಯುನಿಷ್ಟ ತತ್ವಕ್ಕೆ ಆಗಬೇಡ್ರಿ ತುತ್ತಾ ।
ಕ್ರಮ ತಪ್ಪಿ ಆಕ್ರಮಣ ನೇಮು ರಕ್ತಪಾತಾ ।
ಪ್ರೇಮದಿಂದ ಕೊಟ್ಟದ್ದು ಆತ್ಮಕ್ಕೆ ಶಾಂತಾ ॥೩॥

ಎಲ್ಲರು ಅಲ್ಪ ಸ್ವಲ್ಪ ತ್ಯಾಗ ಮಾಡುದೊಳಿತಾ ।
ಇಲ್ಲದವರಿಗಿದ್ದವರು ಕೊಟ್ರ ಸನಮಂತಾ ।
ಕಾಲ ಕಾಲಕನುಸರಿಸಿ ದಾಟಬೇಕ ಕುತ್ತಾ ।
ಹುಲಕುಂದ ಭೀಮ ಹೇಳಿದ ಭೂದಾನ ಗೀತಾ ॥೪॥

# ಭೂದಾನದ ಉಗಮ

ಮಹಾತ್ಮಾ ಗಾಂಧಿಯವರ ತ್ಯಾಗದಫಲದಿಂದ ದೇಶಕ್ಕೆ ಸ್ವರಾಜ್ಯ ಸಿಕ್ಕಿತ್ತು
ಕಾಂಗ್ರೇಸ ಸೇವೆಗಾಗಿ ಹುಟ್ಟಿತ್ತು । ಅಧಿಕಾರ ದೋಳಗ ಕಾಲಿಟ್ಟಿತ್ತು ।
ಮೋಹನದಾಸನ ಮರಣದನಂತರ ರಾಷ್ಟ್ರಕೆ ಕತ್ತಲಕವಿದಿತ್ತು ॥೧॥
ಕಡುದಾರಿದ್ರ್ಯದಿ ಮಡಿಯುವ ಬಡವರ ಬಡತನ ದಿನದಿನಕ್ಕೆ ಹೆಚ್ಚಾಯ್ತು ।
ಮಡವಿಮಕ್ಕಳ ಹೊಟ್ಟೆಗೆ ಬಿರಿಯಾಯ್ತು । ಉಡತೊಡಲಿಕ್ಕೆ ಬಟ್ಟೆ ಸಿಗದೋಯ್ತು ।
ಪಡವುತಕಷ್ಟವ ಸುಡುವುತರಕ್ತವ ಮಿಡಕುವ ಜನಜಂಗುಳಿಯಾಯ್ತು ॥೨॥
ಶ್ರಮಜೀವಿಗಳನು ಕ್ರಮದಿಂದ ದುಡಿಸುವ ಶ್ರೀಮಂತಿಕೆಯು ಭ್ರಮೆಯಾಯ್ತು ।
ಪ್ರೇಮ ಅಂತಃಕರಣವು ಇಲ್ಲದಾಯ್ತು । ರಾಮರಾಜ್ಯದ ಮಾತೇ ದೂರುಳಿತು ।
ಸಮಾಜದೊಳಗಿದ್ದ ಅಸಮಾನತೆಯು ಕ್ರಮೇಣ ಕ್ರಮೇಣ ಬಂದ್ಹೋಯ್ತು ।
ಹೈದ್ರಾಬಾದಸೀಮಿ ತೆಲಂಗಣದಲ್ಲಿ ಕಮ್ಯುನಿಷ್ಟ ತತ್ವದ ಜೋರಾಯ್ತು ।
ಇದರಿಂದ ಹಿಂಸಾಚಾರ ಹೆಚ್ಚಾಯ್ತು । ಅದರಿಂದ ಜಮಿನದಾರ ಕೊಲೆಯಾಯ್ತು ।
ಬಂದುಬಸ್ತ ಮಾಡಿದರು ಸರಕಾರವು ಜನರ ಭೀತಿ ಹಾಗೇಉಳಿತು ॥೪॥
ಪಾದಯಾತ್ರೆಯಿಂದ ಹೋದ್ರ ವಿನೋಬಾಜಿ ಸರ್ವೋದಯಸಮ್ಮೇಲನಲ್ಲಿತ್ತು ।
ಹದಿನೈದ ಏಪ್ರೀಲ ಅಯ್ವತ್ತೊಂದಕೆ ಮುಗಿತು । ಹದಿನೆಂಟಕೆ ಪ್ರಚಾರ ಸುರುವಿತ್ತು ।
ಅದೇದಿವಸ ನಲಗೊಂಡ ಜಿಲ್ಹೆಯ ಪೋಚಂಪಲ್ಲಿ ಹಳ್ಳಿಯೊಳುಸಭೆ ಇತ್ತು ॥೫॥
ಅಲ್ಲಿಯ ಹರಿಜನರೆಲ್ಲ ಕೂಡಿಕೊಂಡು ವಿನೋಬಾಜಿಗೆ ಹೇಳಿದ ಮಾತು ।
ಸಲ್ಪ ಭೂಮಿ ಕೊಡಿಸಿರಿ ನಮಗೀ ಹೊತ್ತು । ಉಲ್ಹಾಸದಿ ದುಡಿವೆವು ನಕ್ಕೊಂತು ।
ಬಲ್ಲಿದ ಸಂತರು ಅಲ್ಲೇ ಸಭೆಯೊಳು ಭೂಮಿದಾನ ಬೇಡ್ಯಾರ ನಿಂತು ॥೬॥
ಶ್ರೀ ರಾಮಚಂದ್ರ ರಡ್ಡಿಎಂಬವರು ಬಹುಪ್ರೇಮದಿಂದ ಸಾರ್‍ಯಾರ ನಿಂತು ।
ನೂರ ಎಕರೆ ಜಮೀನ ಕೊಡತೇನಂತು । ಸರ್ವ ಜನರಿಗಿದು ಆಶ್ಚರ್ಯವಾಯ್ತು ।
ನಾರಾಯಣನ ಪ್ರೇರಣೆಯಿಂದ ಭೂದಾನ ಯಜ್ಞದ ಉಗಮಾಯ್ತು ॥೭॥
ಅಂದಿನಿಂದ ಇಂದಿನವರೆಗೆ ಆದರಂದೋಲನವೇ ಬೆಳದೋಯ್ತು ।
ಮುಂದೆ ಸಂಪತ್ತಿದಾನವು ಬಂದ್ಹೋಯ್ತು । ಬುದ್ಧಗಯೆಯಲ್ಲಿ ಜೀವನದಾನಾಯ್ತು ।
ಬುದ್ಧಿದಾನ ಶ್ರಮದಾನ ಸರ್ವಸ್ವದಾನದ ಮಾರ್ಗ ಸುರುವಾಯ್ತು ॥೮॥
ರಾಜನೈತಿಕ ಆರ್ಥಿಕ ಸಾಮಾಜಿಕ ಎಲ್ಲದರಲಿ ಕ್ರಾಂತಿ ಬೇಕಾಯ್ತು ।
ನಿಜಸರ್ವೋದಯದ ಗುರಿಯಾಯ್ತು । ಸುಜನರ ಸಮೂಹ ಕೂಡುವದೇಳಿತು ।
ಪೂಜ್ಯ ವಿನೋಬಾ ಯಜ್ಞ ತತ್ವಕೆ ಪ್ರಜೆರೆಲ್ಲರದುಮನಸಾಯ್ತು ॥೯॥

ಹಳ್ಳಿಗಳು ಸ್ವಾವಲಂಬನವಾಗಲು ಗ್ರಾಮೋದ್ಯೋಗ ಬೆಳಿಸುವದೊಳಿತು ।
ಹಳ್ಳಿಸ್ವಚ್ಛತೆ ಕಾರ್ಯ ಮಹತ್ವದ ಮಾತು । ಒಳ್ಳೇ ಜ್ಞಾನಶ್ರವಣ ವಾಗ ಬೇಕಂತು ।
ವೇಳೆಗನುಸರಿಸಿ ಪ್ರಾತಃಕಾಲ ಸಾಯಂಕಾಲ ಪ್ರಾರ್ಥನೆನಡೆದರೆ ಸರಿಹೋಯ್ತು ॥೧೦॥
ಉರಭೂಮಿಗೆ ಇಡೀಉರದ್ದೆಲ್ಲಹಕ್ಕ ಸರಿಯಾಗಿ ಹಂಚಿಕೊಂಡ್ರಮುಗದೊಯ್ತು ।
ಊರನ್ಯಾಯ ಊರೋಳು ತೀರಿಸುದು ಶಿಸ್ತು । ಊರಸ್ವಾವಲಂಬಿಯಾದ್ರು ಸಂಪತ್ತು ।
ಉರಿಗೇ ಊರಉದ್ಯೋಗನಡಿಸಿದರ ಉರ್ಜಿತಸ್ಥಿತಿಗೆ ಮುಟ್ಟೇತು ॥೧೧॥
ಪ್ರಾಮಾಣಿಕರಾಗಿ ಒಬ್ಬರೊಬ್ಬರ ಪ್ರೇಮಗಳಿಸಿಕೊಂಡ್ರ ಸುಖವಾಯ್ತು ।
ಗ್ರಾಮರಾಜ್ಯಕೆ ಆದರ ಬೆಲೆಬಂತು । ಸಾಮಾನ್ಯ ಸಮಾಜದುದ್ಧಾರವಾಯ್ತು ।
ನೇಮದಿಹುಲಕುಂದ ಭೀಮಕವಿತಾ ಲಾವಣಿ ಮಾಡಿಹೇಳಿದ ನಿಂತು ॥೧೨॥

## ಜಯದೊರಕಿಸುವ ಭೂದಾನಯಜ್ಞ

ಜಯ ಜಯ ಜಯ ಜಯ ಜಯ ವಾಗತದ ನಿಮಗ ।
ಜಯವಾಗತದ ನನ್ನ ಬಂಧು ಬಾಂಧವರೇ ಪ್ರೇಮದಿಂದ ಭೂದಾನ ಕೊಟ್ಟರ ॥ಪ॥
ಭೂಮಿ ಎಂಬುವದು ಯಾರದು ಅಲ್ಲಾ ।
ರಾಮ ದೇವನ ಅಗಾಧ ಲೀಲಾ ।
ನೇಮದಿಂದ ಆಗುದ ಆದಲಾಬದಲಾ ।
ಕಾಲತಕ್ಕಂತೆ ಅನುಸರಿಸಿ ನಡೆದು ನೀವು ಶೀಲದೊಳಗ ಬಹುಮೇಲ ಆದರ ॥೧॥
ಹವೇ ನೀರು ಆಕಾಶ ಪ್ರಕಾಶವೆಲ್ಲಾ ।
ಅವು ಹೆಂಗ ಯಾರ ಸ್ವಾಧೀನವಿಲ್ಲಾ ।
ನೀವು ನಾವು ಎಲ್ಲಾರ ತಿಳಿಬೇಕಮೊದಲಾ ।
ಮನಸ್ಸು ಎಂಬುದುದೊಡ್ಡದುಮಾಡಿ ಬಡವರ ಬಡತನ ದೂರ ಮಾಡಿದರ ॥೨॥
ಮಂಣಹೊನ್ನ ಇವು ಸ್ಥಿರವಾದದ್ದಲ್ಲಾ ।
ಕಾಣಕಾಣ ಒಬ್ಬಗ ಉಳಿಯುದಿಲ್ಲಾ ।
ದಾನವ ಮಾಡಿದರ ಬಾಳಅನುಕೂಲಾ ।
ಎಲ್ಲರ ಜಲ್ಮವಿದು ಒಂದೆ ಇರುವದು ಪ್ರೇಮದಗಳಿಸಿ ಪುಣ್ಯಪಡೆದರ ॥೩॥
ಪಾದಚಾರಿಯಾಗಿ ಸಂಚಾರಪೂರಾ ।
ತಂದಿ ವಿನೋಬಾಜಿ ತತ್ವದ ಸಾರಾ ।
ಇಂದು ನಾವೆಲ್ಲಾ ಮಾಡಬೇಕ ಜೋರಾ ।
ಚೆಂದ ಹುಲಕುಂದ ಕಂದ ಭೀಮನ ಶಿಷ್ಯ ಸಂಗಣ್ಣ ಹೇಳಿದನುಡಿಯನು ಪಾಲಿಸಿದರ॥೪

—( ಬೆಟಗೇರಿ ಸಂಗಣ್ಣ ಹುಲಕುಂದ )

# ಭೂಮಿದಾನದ ಮಹಿಮೆ

ಕೇಳಿರಿ ಕೇಳಿರಿ ಭಾರತ ಜನರೆ ಭೂಮಿದಾನದ ಮಹಿಮೆಯನೂ!
ಸತ್ಯ ಅಹಿಂಸೆಯ ಪುತ್ಥಳಿ ಗಾಂಧಿಯ ಹೊಸ ಪ್ರಯೋಗದ ಕ್ರಾಂತಿಯನೂ ||
ಹಿಂಸೆಯ ಅಗ್ನಿಕುಂಡದ ಬೆಂಕಿಲಿ ಆಯಿತು ಭೂಮಿದಾನದ ಉಗಮಾ
ಕಮ್ಯುನಿಷ್ಟರ ಖೂನಿ ಪ್ರದೇಶದಿ ಹರಿಯಿತು ರಕ್ತಪ್ರವಾಹದ ಧಾರಾ
ಹೈದರಾಬಾದಿನ ತೆಲಂಗಾಣದ ಊರಲಿ ಹತ್ತಿತು ಬೆಂಕಿಯ ಜ್ವಾಲಾ
ಹಿಂಸಾದೇವಿಯ ಪಾಶವಿವೃತ್ತಿಗೆ ಮಣಿದು ಹೋಯಿತು ತೆಲಂಗಣಾ
ರೋದನದಾ ಕ್ರಂದನ ಕತ್ತಲ ಮೇಘವು ಆವರಿಸಿತು ಪ್ರದೇಶವನಾ || ೧ ||
ಅದೇ ಕಾಲದಿ ಸರ್ವೋದಯ ಸಮ್ಮೇಳನ ಸೇರಿತು ರಭಸದಲೀ
ಸಂತ ವಿನೋಬಾ ಬಂದನು ಅಲ್ಲಿಗೆ ಕಾಲುನಡಿಗೆಯಾ ಯಾತ್ರೆಯಲೀ
ದುಂದುಭಿ ಮೊಳಗಿತು ಸರ್ವೋದಯದಾ ಮಹರ್ಷಿ ಭಾವೆಯ ವಾಣಿಯಲೀ
ಶಿವರಾಂಪಲ್ಲಿಯ ಸಮ್ಮೇಳನವು ಮುಗಿದುದು ಶಾಂತಿಯ ಮಂತ್ರದಲೀ
ಹೊರಟನು ಪ್ರೇಮದ ಶಕ್ತಿಯ ತೋರಲು ತೆಲಂಗಾಣದ ಊರಿನಲೀ || ೨ ||
ತೆಲಂಗಾಣದ ಪ್ರಾರ್ಥನ ಸಭೆಯಲಿ ಎದ್ದಿತು ಭೂಮಿ ಸಮಸ್ಯಾ
ಭೂಮಿಹೀನ ಹರಿಜನ ಮಕ್ಕಳ ಪ್ರಶ್ನೆಯು ಬಂದಿತು ಆವಾಗಾ
ಆಗಿನ ಕಾಲದಿ ಭೂಮಿದಾನವ ಕೇಳಿದ ಗಾಂಧೀದೂತ ವಿನೋಬಾ
ಉದಾರ ಹೃದಯದಿ ರಾಮರೆಡ್ಡಿಯು ಕೊಟ್ಟನು ಮೊದಲಿನ ಭೂದಾನಾ
ತೋರಿಸಿಕೊಟ್ಟನು ಪ್ರೇಮದ ಬುಗ್ಗೆಯ ಭಾರತ ದೇಶದ ಸಂಸ್ಕೃತಿಯಾ || ೩ ||
ಅಲ್ಲಿಂದೆದ್ದಿತು ರಭಸದ ಕ್ರಾಂತೀ, ಭೂಮಿದಾನದ ಹೊಸ ಗಾಳೀ
ನಿದ್ರೆಲಿ ಮಲಗಿದ ಚೇತನ ಶಕ್ತಿಯು ಎಚ್ಚರವಾಯಿತು ವೇಗದಲೀ
ಮೂಲೆ ಮೂಲೆಗೆ ಹರಡಿತು ದೇಶದಿ ಭೂಮಿದಾನದಾ ಹೆಸರಿನಲೀ
ಸತ್ಯ ಅಹಿಂಸೆಯ ಮಧುರ ಸಂಗೀತ ಮೊರೆಯಿತು ಆರ್ಯಾವರ್ತದಲೀ
ಸೊಂಪಿನ ಗಾಳಿಯು ಶೀತಲ ಕಂಪನು ತೀಡಿತು ಭಾರತ ನಾಡಿನಲೀ || ೪ ||
ಗಾಂಧೀ ಮಹಾತ್ಮನ ನಾಯಕತ್ವದೀ ಭಾರತ ಪಡೆಯಿತು ಸ್ವಾತಂತ್ರ್ಯ
ರಾಜಕೀಯದ ಕ್ರಾಂತಿಯು ಮುಗಿಯಿತು ನಮ್ಮವರಾಳುತ ರಾಜ್ಯವನಾ
ಪ್ರೇಮದ ಶಕ್ತಿಲಿ ಮುರಿದರು ಬ್ರಿಟಿಷರ ರಾಜಸತ್ತೆಯ ಶಾಸನವಾ
ಶೋಷಣವೆಂಬ ಕೇಂದ್ರಿತ ಪದ್ಧತಿ ಹೀರುತ ತುಳಿಯುತ ಭಾರತವಾ
ಯಂತ್ರವು ಬಂದು ಕೆಲಸವ ನುಂಗಿ ಹರಡಿತು ದೇಶದಿ ವೈಗಳ್ಯತನಾ || ೫ ||

ಬಡತನವೆಂಬ ರಾಕ್ಷಸಿ ಭೂತ ಮನೆ ಮನೆಯಲ್ಲಿ ನೆಲೆಸುತಲೀ
ಗಾಂಧಿ ನೆನೆಸಿದ ರಾಮರಾಜ್ಯವು ಹಾಗೆಯೆ ಉಳಿಯಿತು ಗಾಳಿಯಲೀ
ಜನತೆಯು ಮರೆಯಿತ್ತು ಗಾಂಧಿ ಮಾರ್ಗವ ನಡೆಯಿತು ಸ್ವಾರ್ಥದ ಹಾದಿಯಲೀ
ಗಾಂಧಿವಾದಿ ಎನ್ನುವ ಜನರು ಖಾದಿಯ ತೊರೆದರು ಮರವಿನಲೀ
ದೇಶವ ಕವಿಯಿತು ಅಂಧಕಾರವು, ರೋದನ ಹಚ್ಚಿತು ಜನತೆಯಲೀ ॥ ೬ ॥

ಕಾಳರಾತ್ರಿಯ ಗರ್ಭದಿಂದಲೀ ಸಿಡಿದಬ್ಬರಿಸಿತು ಹೊಸ ಪ್ರಕಾಶಾ
ಸಮಾಜಕ್ರಾಂತಿಯ ದೇಶದಿ ತರಲು ನುಂಗುತ ವಿಷಮತೆ, ಪಕ್ಷದ ಜಗಳಾ
ಐಕ್ಯದ ಜೇನಿನ ಹೂಳೆಯನು ಹರಿಸಲು ಹೊರಟಿತು ದೇಶದಿ ಭೂದಾನಾ
ಎಲ್ಲ ಪಾರ್ಟಿಯ ಬೆಂಬಲ ದೊರೆಯಿತು ನಡೆಯಿತು ಸಂತನ ಪದಯಾತ್ರಾ
ಸಮಾಜವಾದಿ ಜಯಪ್ರಕಾಶರು ಹೊರಟರು ಕೇಳುತ ಭೂದಾನಾ ॥ ೭ ॥

ಭೂಮಿತಾಯಿಯ ಪುತ್ರರು ನಾವು ಎಂದು ವೇದವು ಸಾರುತಿದೇ
ಸಂಗ್ರಹ ಬುದ್ಧಿಯ ಸ್ವಾರ್ಥದ ಹಾದಿ ಹಿಡಿಯಲಿ ಬೇಡಿ ಎನ್ನುತಿದೇ
ಭೂಮಿಯಹಕ್ಕು ಎಲ್ಲರ ಹಕ್ಕು ಎಂದು ಧರ್ಮವು ಹೇಳುತಿದೇ
ಧರ್ಮದ ಹಾದಿಯ ತುಳಿಯದ ಮಾನವ ರಾಕ್ಷಸನೆಂದು ಘೋಷಿಸಿದೇ
ಭೂಮಿಹೀನರಾ ಕಂಠದ ಘರ್ಜನೆ ರೊಚ್ಚಿನ ರಭಸದಿ ಏರುತಿದೇ ॥ ೮ ॥

ಕಲ್ಲೂ ಎಣ್ಣೆಯ ಕಲಹಕ್ಕಾಗಿ ಆದವು ಎರಡು ಯುದ್ಧಗಳೂ
ಹಿಟ್ಲರ ಷಾಹಿಯ ಬೆಂಕಿಯ ಜ್ವಾಲೆಲಿ ಬೆಂದುಹೋದವು ರಾಷ್ಟ್ರಗಳೂ
ಬಾಂಬಿನ ಸಿಡಿತದ ಘರ್ಜನೆಯಲಿ ನಡುಗಿಹೋದವು ದೇಶಗಳೂ
ಪಾಶವಿ ಹಿಂಸೆಯ ಜೀವನ ಕೃತ್ಯವ ಹಿಡಿದನು ವಿಶ್ವದ ಮಾನವನೂ
ದುಡ್ಡು ದುಗಾಣಿಯ ಮೋಹದ ಸೆಳವಿಗೆ ಬಿಟ್ಟನು ಮಾನವಧರ್ಮವನೂ ॥೯॥

ಯಾರದು ಸೃಷ್ಟೀ ಯಾರದು ವಿಶ್ವ ಎಂದು ಸತ್ಯವು ಕೇಳುತಿದೇ ?
ಬೆಳೆಸಿದ ಧಾನ್ಯ ನಿನ್ನದು ಆದರೆ ಭೂಮಿಯೋ ನಿನ್ನದು ಆದೀತೆ ?
ಗಾಳಿ ಮಳೆಯು ನನ್ನದು ಎಂದರೆ ಸತ್ಯವು ನಿನ್ನನ್ನು ಒಪ್ಪುವುದೇ !
ನಮ್ಮದು ಎಂಬುದು ಜಗದೊಳು ಯಾವುದು ಧೈರ್ಯದಿ ತೋರಿಸಿಕೊಡಿರಣ್ಣಾ
ನಮ್ಮದು ಎನ್ನುವ ಭ್ರಮೆಯನು ಬಿಟ್ಟು ಸುಖದಲಿ ಬಾಳನು ನಡೆಸಿರಣ್ಣಾ॥೧೦॥

ಎಲ್ಲಾ ವಿಶ್ವವು ಸೃಷ್ಟಿಕರ್ತ ಪರಮಾತ್ಮನಿಂದಲೇ ತುಂಬಿಹುದೂ
ಮಾನವ ಜನ್ಮವು ಸರ್ವಶಕ್ತಿಮಾನ್ ಈಶ್ವರನಿಂದಲೇ ಆಗಿಹುದೂ
ಅತನ ಆಜ್ಞೆಯು ಮೇರೆಗೆ ನಡೆವುದು ಸಂಸಾರದ ಈ ಸಾಗರವೂ
ಎನ್ನುವ ಎಚ್ಚರ ಜನತೆಗೆ ಕೂಡಲು ಶರಣ ವಿನೋಬಾ ಹೊರಟಿಹನೂ
ಪ್ರೇಮದಿ ಬಾಳುವ ಪಾಠವ ಕಲಿಸಲು ಹಿಡಿದನು ಯಾತ್ರೆಯ ಹಾದಿಯನೂ ॥೧॥

ಭಾರತ ದೇಶದ ಆರ್ಥಿಕ ಕ್ರಾಂತಿಯು ಹೊಸ ಪ್ರಯೋಗವೀ ಭೂಯಜ್ಞಾ
ಎಲ್ಲೆಡೆ ಶಾಂತಿಯು ಹಾಲಿನ ಹೊಳೆಯನು ಹರಿಸುವ ಇಂದಿನ ಘನಯಾಗಾ
ತ್ಯಾಗದ ಜೀವನ ಕಲಿಸಲು ಹೊರಟಿಹ ಪ್ರಜಾಯಜ್ಞದ ಭೂದಾನಾ
ಅಸಮಲೋಕದಿ ಸಮತೆಯ ತರಲು ಹೊರಟನು ಶರಣ ವಿನೋಬಾ
ಜಯ ಜಯವಾಗಲಿ ಶರಣ ವಿನೋಬಾ ಎನ್ನುತ ಕೇಳಿರಿ ಭೂದಾನಾ ॥ ೧೨ ॥

—ಪಿ. ವೆಂಕೋಬರಾವ್.

## ದ್ರೌಪದಿ ಮಾಡಿದ ಪುಣ್ಯ

ದಾನಧರ್ಮದಿಂದ ನಿಮಗ । ಏನ ಲಾಭ ಸಿಗುವದೆಂಬ
ಜ್ಞಾನವಾಡತದ ಇದವಂದ ಕಥಿ । ಜಾಣರಾಗಿ ಕೂತಕೇಳ್ರಿ ಬರತತಿ ಮತಿ
ಭಾನುಮಂಡಲದಲ್ಲಿ ಬೆಳಗುವದು ನಿಮ್ಮ ಕೀರ್ತಿ ॥
ಮಾಡಿದಂಥಾ ಪುಣ್ಯಯಲ್ಲಾ । ಕೇಡಆಗುದಿಲ್ಲ ತಾಯಿ
ಕೂಡಿಕೊಂಡ ಫಲಾ ನಿಮಗ ಓಡಿಬರತತಿ । ಬೇಡಿಬಯಸಿದಂಥ ಭಾಗ್ಯನಿಮಗ
ಲಗು ಸಿಗತತಿ ॥ ೧೯ ॥

ದ್ವಾಪಾರ ಯುಗದೊಳಗ ಕೇಳ್ರಿ । ದೃಪದ ರಾಜನ ಪುತ್ರಿ
ದ್ರೌಪದಿಅಂತ ಅಕಿಗೆ ಹೆಸರಇಟ್ಟತಿ । ರಾಜಪಿಂಡ ವಳ್ಳೇ ಸೌಖ್ಯದಿಂದ ಬೆಳದ
ಬಂದತಿ ॥ ಅಕಿ ಲಕ್ಷಣ ಸೌಂದರ್ಯದಿಂದ ತುಂಬಿಬಿಟ್ಟತಿ ॥
ಹತ್ತವರ್ಷ ಆದಕೂಡಲೆ । ಹೆತ್ತ ತಂದಿತಾಯಿಗಳು
ಸುತ್ತುಕಡೆವರಾಹು ತುಕುತಸಿದ್ದನಡದತಿ । ಹಗಲು ರಾತ್ರಿ ಸೋಗಸಇಲ್ಲ
ಅವರಿಗಿ ಚಿಂತಿ ಹತ್ತೇತಿ ॥ ೧೯ ॥

ರಾಜಪುತ್ರಿ ದ್ರೌಪದಿಯ । ಮೋಜಿನಿಂದ ಸ್ನಾನಕ್ಕೆ
ಸಜಹೋಗತಿದ್ಲ ಅಕಿ ದಿನಂಪ್ರತಿ । ತನ್ನ ಗೆಳತಿಯರನ ಕೂಡಿಕೊಂಡ ಹೋಗು

ಪದ್ಧತಿ ।। ನಿತ್ಯನೇಮದಂತೆ ಜಲಕ್ರೀಡಾ ಆಟನಡದತಿ ॥
ಅದೇ ಸಮಯಕ್ಕೆ ಮಹಾತಪಸ್ಸಮಾಡಿದಂಥಾ ದುರ್ವಾಸ ಮುನಿಗಳಸ್ವಾರಿ ಬಂದತಿ । ಅವರನ್ನೋಡಿ ಇವರು ಕೆಳಗಸ್ನಾನಾ ಮಾಡುದಾಗೇತಿ ॥ ಗೀ ॥
ಹಳೇಕೌಪಾ ತೊಳೆದುಹಿಂಡಿ । ಹೊಳಿಯದಂಡಿ ಮ್ಯಾಲಹಾಕಿ
ಶೆಳವ ನೀರಿನೊಳಗ ಸ್ನಾನಸಜ್ಜ ಆಗೇತಿ । ಘಾಳಿಬಂದ ಹಳಿಕೌಪಾ ಆಗ ಯಬಿಸಿ ಬಿಟ್ಟತಿ ।। ಹಾಕಿದ ಕೌಪಸುದ್ಧಾ ನೀರಿನ ಶಳಿವಿಗೆ ಕಳಚಿಹೋಗೇತಿ ॥
ಬರೇಬತ್ಲೆ ನದಿಯೊಳಗ । ಆರ ತಾಸ ನೀರಾಗ ಕೂತ್ರ
ಘಾರಸೇರಿ ಧೀರರುಷಿಗೆ ನಡಗಹುಟ್ಟೇತಿ । ಮರ್ಯಾದಿಗಂಜಿ ನೀರಬಿಟ್ಟ ಬಾರದಾಗೇತಿ ॥ ಗೀ ॥

ಚಾಲ ॥ ಕುಲು ಕುಲು ನಕ್ಕೊಂತ । ಜಲಕ್ರೀಡಾ ಆಡುವಾಗ
ದ್ರೌಪದಿದೃಷ್ಟಿ ಬಿದ್ದತಿ । ಮುಂದಕಂತ ಎಷ್ಟಹೊತ್ತಾತಿ ॥ ಗೀ ॥
ನೀರೊಳಗ ಕೂತಂಥ । ಕಾರಣತಿಳಿವಲ್ದನಮಗ
ಭಾರಿನಡಿಗ ರುಷಿಗೆ ಹೆತ್ತೇತಿ । ಮುದಕನ ಕೈಪಕಳದುಗ ಕಾಣತತಿ ॥ ಗೀ ॥
ಇಷ್ಟತಿಳದ ದ್ರೌಪದಿಯು । ಶ್ರೇಷ್ಟಜರದ ಶಾಲ ಸರಗ । ಹರದವಗದ್ಲ ಕೈಪದಾಕ್ಕತಿ । ಜರದಕೈಪರುಷಿಗೆ ಮುಟ್ಟೇತಿ ॥ ಗೀ ॥

ಕೂಡಪಲ್ಲ ॥ ಅದೇಜರದ ಶಾಲಿಶರಗ । ಮುದಕ ದುರ್ವಾಸರುಷಿ । ಮುದದಿಂದ ಮೌನತಾಳಿ ಕೌಪಾಧರಿಸೇತಿ । ನನ್ನಮಾನಾ ಕಾದ್ಲ ದ್ರೌಪದಿ ಅಂತ ಮನಸ್ಸಿಗಿನಟ್ಟತಿ । ಜ್ಞಾನದೃಷ್ಟಿಯೊಳಗ ಆಶಿರ್ವಾದ ದ್ರೌಪದಿ ಗಾಗೀತಿ ॥ ಗೀ ॥ ಮಾಡಿದಂಥಾ ಪುಣ್ಯ............ ॥

೨

ಮುಂದೆ ಕೆಲವು ದಿವಸದಮೇಲೆ । ತನ್ನಸುಂದರ ಮಂದಿರದಲ್ಲಿ । ನಂದ ದಿಂದ ದ್ರೌಪದಿ ಸ್ವಯಂವರ ಆಗೇತಿ । ಪಾಂಡುರಾಜನ ಪುತ್ರರಿಗೆ ಆಗಜಯಾ ಸಿಕ್ಕತಿ । ಓಡಿಬಂದ ಮಾಲಿಹಾಕಿ ಮಡದಿ ಆಗ್ಯಾಳ ದ್ರೌಪದಿ ॥

ಪಾಂಡುರಾಜನ ಪುತ್ರರ । ಹೆಂಡತಿಯಾದ ದ್ರೌಪದಿಗೆ । ಪಾಂಚ್ಯಾಲಿ ಅಂತ ಆಗಹೆಸರ ಬಂದತಿ । ಮಹಾಪತಿವೃತಾ ಸಿರೋಮಣಿ ಆಗ್ಯಾಳ ಪ್ರಖ್ಯಾತಿ ॥ ಗೀ ॥

ಹೆತ್ತ ತಂದಿತಾಯಿ ಬಿಟ್ಟ । ಅತ್ತಿ ಮಾಂವರ ಮನಿಯಲ್ಲಿ । ನಿತ್ಯದಲ್ಲಿ ಸೇವಾಮಾಡುವ ಸಮಾಜ ಬಂದತಿ । ಸತಿಧರ್ಮದಂತೆ । ಪ್ರೀತಿ ಪತಿಗಳಮೇಲೆ ಇಕಿಭಕ್ತಿ । ಮೃತ್ಯಲೋಕದಲ್ಲಿ ದ್ರೌಪದಿಯ ಪ್ರಭಾವತೋರೇತಿ ॥

ದುಷ್ಟತನ ಕೌರವರು । ಕಷ್ಟ ಕೊಡಬೇಕಂತ ಇವರಿಗೆ । ಕೆಟ್ಟವಾಸನೆ ಅನ್ನುದು ವಳಗಮೆಟ್ಟಮಾಡೇತಿ । ನಷ್ಟಆಗು ಕಾಲಕ್ಕ ಅವರಿಗೆ ಅಷ್ಟ ಮದಾ ಬಂದತಿ ॥ ಗೀ ॥

ಅಣ್ಣತಮ್ಮರ ಜಗಳವನ್ನು । ಬಣ್ಣಿಸಿ ಹೇಳಲಾರೆ ನಾನು । ದ್ಯೂತ ದೊಳಗ ಕೌರವರಿಗೆ ಗೆಲವ ಬಂದತಿ । ಮೋಸಥರದ ಫಾಸಿಯಿಂದ ಇಷ್ಟ ಅಡ್ನಾಡಾಗೇತಿ । ಪಾಂಡವರರಾಜ್ಯ ಅಲ್ದ ಅವರಪತ್ನಿ ಕಳದತಿ ॥

ದುರ್ಯೋಧನನ ರಾಜ್ಯದಲ್ಲಿ । ಧರ್ಮಕ್ಕೆಲ್ಲಿ ಜಯಾ ಅತಿ । ಅಧರ್ಮದ ಸದಾ ತಾಂಡವನೃತ್ಯ ನಡದತಿ । ಸದ್ಧರ್ಮ ಸದಾಚಾರದ ವಧಾಆಗಿಬಿಟ್ಟತಿ ॥ಗಿ॥

ಸಾರ್ವಭೌಮ ದುರ್ಯೋಧನಗ । ಯಾರದೇನ ಖಬರ ಇಲ್ಲಾ । ಕ್ರೂರ ತನದ ಕೃತ್ಯಅಂತರ ಮೀರಿನಿಂತತಿ । ದ್ರೌಪದಿಮಾನಾ ಕಳಿಬೇಕಂತ ಬುದ್ಧಿ ಉತ್ಪನ್ ಆಗೇತಿ । ದುಷ್ಟ ದುಶ್ಯಾಸನನ್ನು ಕರೆದುಹಿಂಗ ಹುಕಂ ಆಗೇತಿ ॥

ಅರಮನಿಯೊಳಗ ಇದ್ದಂಥ । ಅರಗಿಳಿ ದ್ರೌಪದಿಸೀರಿ । ಶೆರಗಹಿಡಿದು ಧರರಗ ಜಗ್ಗಿ ತರಬೇಕಾಗೇತಿ । ಸರ್ವಸಭಿಕರಲ್ಲಿ ಮಾಡಬೇಕಅಂತಾರ ಫಜೀತಿ ॥ ಗೀ ॥

ಚಾಲ ॥ ಅತ್ಯಾಚಾರದ ಕೌರವನು । ಸತ್ಯಾನಾಶಆಗುದಕ್ಕ । ದ್ರೌಪದಿಯನ್ನು ಹಿಡಿದು ಎಳೆದುತಂದಾ । ಧರ್ಮರಾಜ ಭೀಮ ಅರ್ಜುನ ಪಾಂಡವರ ಮುಂದಾ ಭೀಷ್ಮ ದ್ರೋಣಾಚಾರಿ । ತ್ರಾಸಮಾಡಿಕೊಂಡ । ನಿಂತಾರ ದ್ರೌಪದಿ ಮುಂದಾ । ಅವರ ಬಾಯಿಲಿ ಶಬ್ದ ಇಲ್ಲ ವಂದಾ ॥ ಗೀ ॥

ದುಷ್ಟ ದುಶ್ಯಾಸನ । ಎಷ್ಟ ಸೀರಿಸೆಳದನೋಡ । ಬೆಟ್ಟದಷ್ಟರಾಸಿತ್ತ ಮುಂದಾ । ಅಕಿಮೈಯ್ಯಾಲ ಸೀರಿಇದ್ದ ಕ್ಕಿಂದ್ದಂಗಇತ್ತ ಮೊದಲಿಂದಾ ॥ಗೀ॥

ಕೂಡಪಲ್ಲ ॥ ಅರಬೆರಳಸೀರಿ ಶೆರಗ । ಹರದ ನೀರಾಗ ಬಿಟ್ಟಕೌಪ । ದುರ್ವಾಸ ಮುನಿಗಳಮಾನಾ ಹೆಂಗಉಳಿಸೇತಿ । ಅದೇಪುಣ್ಯ ದ್ರೌಪದಿಗೆಗ ಸಧ್ಯಾ ವದಿಗೇತಿ । ಅಕ್ಷಯ ವಸ್ತ್ರದ ಆಶಿರ್ವಾದ ಅಕಿಗೆ ಮೊದಲ ಆಗೇತಿ ॥ ಮಾಡಿದಂಥ ಪುಣ್ಯ......... ॥ ಗೀ ॥

೩

ಐದುವಂದಿ ಪತಿಗಳಿದ್ದು । ಭವ್ಯರೂಪನೋಡತಾರ । ಬಾಯಿಬಿಚ್ಚಿ ವಬ್ಬರಿಗೊಬ್ಬರು ಕಡದ್ಹಾಗೇತಿ । ನೂರ ಗಧಾ ತೂರುವ ಭೀಮನಶಕ್ತಿಯಲ್ಲಿ ಹೋಗೇತಿ । ಮೂರ ಲೋಕದ ಗಂಡ ಅರ್ಜುನನ ಅರ್ಬಾಟ ಅಡಿಗೇತಿ ॥

ರುಂಡದಿಂಡ ಬೇರೆ ಮಾಡುವ । ಪುಂಡ ಪ್ರಚಂಡ ಗಂಡುಗಲಿಗಳ ಪಾಂಡವರ ಮುಖಾ ಆಗ ಕೆಳಗ ಆಗೇತಿ । ಹೆಂಡತಿಗೆ ಆಗು ಅವಮಾನ ಯಾರಿಂದ ಉಳದತಿ ॥ ಗೀ ॥

ಆರ ಬೆರಳ ಕೌಪ ಧರಿಸಿ । ಅರ ಕೋಟಿ ಸೀರಿಯಾಗಿ । ಕೌರವರ ದರ್ಬಾರ ದಲ್ಲಿ ಮಾನಾ ಕಾದತಿ । ದ್ರೌಪದಿ ಮಾನಾ ಕಳಿಬೇಕಂದ್ರ ಆಗ ಯಲ್ಲಿ ಹೋಗೇತಿ । ದುಷ್ಟ ಕೌರವರಿಗೆ ಕಷ್ಟ ಬಿಟ್ಟಕೈಯಸೋತತಿ ॥

ಅನ್ಯರ ಅಬರು ಕಳಿಬೇಕಂದ್ರ । ತನ್ನ ಅಬರು ಉಳಿಯುದಿಲ್ಲಾ । ಸುಣ್ಣಾ ತಿಂದ್ರ ಸೊಲಗನಂಗ ಬಾಯು ಬಿಡತತಿ । ಮುಂದೆ ಕೌರವರ ಅವಮಾನ ಆಗಿಬಿಟ್ಟತಿ ॥ ಗೀ ॥

ಕೌಪದಾನಮಾಡಿದಂಥಾ । ಕೌತುಕ ವಾದ ಕಥಿಸಾರ । ಕೂತನಿತ್ತ ಮಂದಿಗೆಲ್ಲ ತಿಳದಬಂದತಿ । ಈಗನಿಮಗು ದಾನಾಮಾಡುವಂಥಾ ಸ್ಫೂರ್ತಿ ಆಗೇತಿ । ಆತ್ಮಸಂತೋಷದಿಂದ ಕೊಟ್ರ ಫಲಾ ಸಿಗತತಿ ॥

ಅನ್ನ ಇಲ್ಲದ ಸಣ್ಣಾಗಿ । ಉಂಣಾಕ ಇಲ್ಲದ ಬಡವರಿಗೆ । ಭೂಮಿ ಕೊಟ್ಟ ಸಲುಹು ವಂಥಾಕಾಲ ಬಂದತಿ । ವಮ್ಮೆ ಕಣ್ಣಮುಚ್ಚಿ ಭೂಮಿಕೊಟ್ರ ಮುಗದ ಬಿಡತತಿ ॥ ಗೀ ॥

ಅನ್ನದಾನ ಕನ್ಯಾದಾನ । ಚಿನ್ನದಾನಕಿಂತಹೆಚ್ಚ । ಭೂಮಿದಾನದ ಫಲಾ ಈಗ ಯಾರಿಗಿ ತಿಳದತಿ । ರಕ್ಷಣಮಾಡುವಂಥಾ । ಅಕ್ಷಪಾತ್ರ ನಮಗ ಬರತತಿ । ಮೋಕ್ಷಕೊಡುವಂಥಾ ಮಹಾದೇವನ ದಯಾಇರತತಿ ॥

ನನ್ನಹೊಲಾ ನನ್ನಮನಿ । ನನ್ನದುಡ್ಡು ಅನ್ನುವಂಥಾ । ಭಿನ್ನಭಿನ್ನ ಭಾವಯಲ್ಲಾ ಹೋಗಿಬಿಡತತಿ । ಮಾನ್ಯವಂತ ವಿನೋಬಾಜಿಯವರ ತತ್ವ ಬಂಪತಿ ॥ ಗೀ ॥

ಚಾಲ ॥ ದಾನಮಾಡಿದ ದ್ರೌಪದಿಗೆ । ಏನ ಪುಣ್ಯಾಸಿಕ್ಕಿತೆಂದು । ತಿಳಿಸಿಹೆಳಿದ ಈ ಕವಿತಾ । ನೆನಪಿಟ್ಟನಡಿರಿ ಈ ಮಾತಾ ॥

ಹೊಸೂರ ಮಡಿವಾಳಸ್ವಾಮಿ । ಹಸನುಳ್ಳಪದದಿಂದ । ಪಸರಿಶ್ಯಾನ ಈಹೊತ್ತಾ । ಪ್ರಚಾರಮಾಡತಾನ ಅವನೇಸ್ವತಃ ॥ ಗೀ ॥

ಕೊಡಪಲ್ಲ ॥ ಪೊಡವಿಯೊಳಗೆ ಇಂಥಾ ಹಾಡಕೇಳಿ ನಾವು । ನಡಿಯಲಿಕ್ಕೆ
ಬರಬೇಕಶಕ್ತಿ । ದಾನಾಮಾಡುವಲ್ಲಿ ನಾವು ಇಡಬೇಕಭಕ್ತಿ ।
ದಾನ ಮಾಡುವಂಥಾ ಮಾನವರಿಗೆ ಆಗುದುಮುಕ್ತಿ ॥
ಮಾಡಿದಂಥಾ ಪುಣ್ಯ..........॥ ಗೀ ॥

## ಸರ್ವರ ಭೂಮಿ

ಪ್ರೇಮಭಾವದಿಂದ । ನೇಮದಂತೆ ನಾವು ಭೂದಾನ ಬೇಡುನಬಾ । ವಿನೋಬಾಜಿ ತತ್ವವ ತಿಳಿಸೂಣಬಾ । ದೀನರ ಕಷ್ಟವ ಕಳಿಯೂನ ಬಾಬಾ ॥

ಸರ್ವರುಂಬುದು ಭೂಮಾತೆಯ ಅನ್ನಾ । ಸರ್ವರು ಭೂದೇವಿ ಪುತ್ರರಲ್ಲೆನಾ । ಸರ್ವರಿಗೆ ಭೂಮಿ ಇರಬೇಕಸಮಾನಾ ॥

ಹೆಚ್ಚು ಕಡಿಮಿಯೆಂಬ । ತುಚ್ಚಭಾವ ಅಳಿದು । ನೆಚ್ಚಿನ ಭಾರತದ । ಹುಚ್ಚನು ಬಿಡಿಸಲು । ಸ್ವಚ್ಛಾಗಿ ತಿಳಿಸೂಣಬಾ । ಕೆಚ್ಚದಿ ಸೇವಕರಾಗುನುಬಾ । ನಿಚ್ಚಳ ಗುಣದಿಂದ ದುಡಿಯೂನಬಾಬಾ ॥ ೧ ॥

ಭೂಮಿಅಂದರ ಯಾವವ್ಯಕ್ತಿ ಸೊತ್ತಲ್ಲಾ । ನಂದುನಿಂದು ಅಂಬುವಮಾತ ನಿಜವಲ್ಲಾ । ಹಿಂಗ ಎಷ್ಟೋಮಂದಿ ಆಗಿಹೋಗೇರ ಮೊದಲಾ ॥

ಖರೇದಿಕಾಗದಗಳು । ತಿರಿಗಿಮುರಿಗಿ ಆಗಿ । ಧರಿಗೆ ದೊರೆಗಳಾಗಿ । ಸ್ಥಿರವಾಗಿ ಇದ್ದವರು । ಅವರ್‍ಯಾರ ಕೇಳುಣ ಬಾ । ಅರಿಯದ ಮಾತನ್ನು ತಿಳಿಸೂಣಬಾ । ಗುರುವಿನಗುಲಾಮನಾಗುನು ಬಾಬಾ ॥ ೨ ॥

ಬಡವ ಶ್ರೀಮಂತರು ಅಂಬುವತೊಡಕ । ನಡುವೆ ಬಂದತಿಇದು ನಮ್ಮ ನಿಮ್ಮ ಗುಣಕ । ಹಡೆದ ಭೂಮಾತೆಗೆ ಇದುಯಷ್ಟಕ ॥

ವಂದೇತಾಯಿಇಂದ । ಬಂದಮಕ್ಕಳಿಗೆ । ಕುಂದುಕೊರತೆನೋಡಿ ನೊಂದಿಕೊಳ್ಳುವಳೊ । ಮುಂದಾಗಿ ಬೇಡೂನಬಾ । ವಂದೊಂದತತ್ವದ ತಿಳಿಸೂಣಬಾ । ಗಾಂಧಿಜಿಶಿಷ್ಯನ ಯಜ್ಞಕ್ಕೆಬಾಬಾ ॥ ೩ ॥

ದೇಶ ಅಂದರದೊಡ್ಡ ದಾಸೋಹಕಮತ । ಸೋಸಿನೋಡಿದರ ಯಲ್ಲವು ವ್ಯರ್ಥ । ಹೇಸಿ ಸಂಸಾರದ ಆಸೇವ ಮರತಾ ।

ಖಾಸಮುನಿ ತಾನೆಂದು । ಧ್ಯಾಸಿಟ್ಟನಡೆದರ । ಈಶನಇಚ್ಛೆಗೆ । ದಾಸಾನುದಾಸಾಗಿ । ಬೇಕಾಗಿ ದುಡಿಯೂಣಬಾ । ಬ್ಯಾಸರ ಅಂಬುದು ಕಳಿಯೂನಬಾ । ಮನಸ್ಸಿನವಿಷಮತೆ ದೂಡುನುಬಾಬಾ ॥ ೪ ॥

ವಸುಧಿಯೊಳಗೆ ಇಂಥಾಹಸನುಳ್ಳ ಕವಿತಾ । ಹೊಸೂರ ಮಡಿವಾಳ

ಸ್ವಾಮಿ ಮಾಡುಂವತುರ್ತಾ । ಕುಸುಮದ ದಳದಂತೆ ಭೂಮಿಯುಸಮತಾ ॥
ಮಾಡುವ ವಡಿಯನ್ನ । ನುಡಿಯಕೇಳಿ ನಾವು ತಡಿಯಾದ ಬ್ಯಾಡಿನ್ನ ।
ನಡಿಯೂನ ಯಜ್ಞಕ್ಕೆ ಭೂಮಿಯು ಬೇಡೂನಬಾ । ನಮ್ಮಶಕ್ತಿ ಇದ್ದಷ್ಟು ಮಾಡೂನಬಾ । ಹೆಚ್ಚಿಗಿ ಬೆಳಿಸುದ ಬ್ಯಾಡಿನ್ನ ಬಾಬಾ ॥ ೫ ॥

## ಬಡವರ ಭಾಗ್ಯದ ಕಾಲ

ಬಂದಿತು ಬಡವರ ಭಾಗ್ಯದಕಾಲ । ತಂದೆ ಮಹಾತ್ಮಾಜಿ ಶಿಷ್ಯನ ಕಾಲ
ಪ್ರೇಮದಿ ಭೂಮಿಯು ಹಂಚುವಕಾಲ ನೇಮದಿದುಡಿಯುವ ರೈತನಕಾಲ ೧
ರಾಷ್ಟ್ರದ ಉನ್ನತಿ ಆಗುವಕಾಲ ದುಷ್ಟರದೃಷ್ಟಿಯು ಕಟ್ಟುವ ಕಾಲ ೨
ದೀನರ ವಾಣಿಯು ದಾನದಕಾಲ ಮಾನವಂತರ ಮಮತೆಯು ಕಾಲ ೩
ಸಾಮ್ಯ ಯೋಗಿಯ ಸಮತಾ ಕಾಲ ನಮ್ರಭಾವದಿ ನಡೆಯುವ ಕಾಲ ೪
ಮಡಿವಾಳ ಶಿವಯೋಗಿ ಹಾಡುವ ಕಾಲ ಶಡಗರ ಸಾಗರ ಕಾಣುವ ಕಾಲ ೫

## ಭೂದಾನ ಚಕ್ಕಡ

ಪ್ರೇಮದಿಂದ ಭೂಮಿದಾನ ಬೇಡತಾನ ವಿನೋಬಾ ಭಾವೆ ಮುದಕ
ಗ್ರಾಮರಾಜ್ಯ ರಾಮರಾಜ್ಯ ಧರ್ಮರಾಜ್ಯ ಸುರಾಜ್ಯ ಕಟ್ಟಿದಕ ೧
ಹೆಚ್ಚು ಕಡಿಮಿ ಊಚ್ಚ ನೀಚ ಭಾವದ ಹುಚ್ಚ ಬಿಡಿಸುವದಕ್ಕ
ಎಚ್ಚರಾಗಿರೆಂದು ಸ್ವಚ್ಛ ಹೇಳತಾನ ಮುಂಚಿತವಾಗಿ ಜನಕ ೨
ತ್ಯಾಗ ಮಾರ್ಗದಿಂದ ಸಾಗಿರೆಂದು ಈ ಯೋಗಿ ಹೆಳ್ಯಾಂವ ಚೊಕ್ಕ
ಭೋಗ ಲಾಭ ಲೋಭ ನೀಗಿರೆಂದನು ಈಗಿನ ಕಾಲಕ್ಕ ೩
ಭಾರತ ದೇಶದಲ್ಲಿ ಐದು ಕೊಟಿ ಎಕರೆ ಭೂಮಿ ಕ್ಕೂಡಿಸಬೇಕ
ದೊರೆತದು ದುಡಿಯುವ ಬಡವರಿಗೆಲ್ಲಾ ಕೊಡಬೇಕೆನ್ನುವ ಶೂಕ ೪
ಬಡತನ ಇರಬಾರದ ಸಾವಕಾರಕಿ ಉಳಿಬಾರದ ಆಗ ಎಲ್ಲರಿಗಿ ಸುಖ
ಒಡಿಯ ಕೂಲಿಕಾರ ರೂಢಿ ತಪ್ಪಿದರ ಪಾಡ ಹಿಂದುಸ್ತಾನಕ ೫
ದಯವೇ ಧರ್ಮದ ಮೂಲ ಸರ್ವರಿಗೆ ಸಮ ಪಾಲ ಗುರಿಯು ಸಾಧಿಸುದಕ
ನ್ಯಾಯ ನೀತಿ ಶೀಲಪ್ರಿಯ ಹುಲಕುಂದ ಭೀಮಕವಿ ಕಡಕ ೬

ಮುದ್ರಕಃ— ದಿ ಬೆಳಗಾಂವ ಪ್ರಿಂ. ಏಂಡ ಪ. ಹೌಸ, ಬೆಳಗಾಂವ.
ಪ್ರಕಾಶಕಃ— **ಬಾಬೂ ಕಾಮತ, ೧೭೨೯, ಕೇಳಕರಬಾಗ, ಬೆಳಗಾಂವ.**
**ಬೆಲೆ ೦-೧-೦**